ವಾಸುದೇವ ಬಡಿಗೇರ *

# ಬಾದುಬ್ಬೆ-ಬನಶಂಕರಿ ಶಿಲ್ಪಗಳು

ಪ್ರಾಚೀನ ಕಾಲದಿಂದಲೂ ಭಾರತದಾದ್ಯಂತ ಪ್ರತಿಯೊಂದು ಗ್ರಾಮದಲ್ಲಿಯೂ ಗ್ರಾಮದೇವತೆಯ ಆರಾಧನೆ ಪ್ರಚಲಿತವಿದೆ. ಬೇರೆ ಬೇರೆ ಹೆಸರಿನಿಂದ ಮತ್ತು ವಿಭಿನ್ನ ರೂಪಗಳಲ್ಲಿ ಕಾಣಿಸಿಕೊಳ್ಳುವ ಈ ದೇವತೆಗಳಲ್ಲಿ ಬಾದುಬೆ-ಬನಶಂಕರಿಶಿಲ್ಪಗಳು ಅಪರೂಪ. ವನದುಬ್ಬೆ-ಬನದುಬ್ಬೆ ಬಾದುಬ್ಬೆ-ಬಾದುಬೆ-ಬಾದುಂಬೆ-ಚೋದುಂಬೆ-ಬನಶಂಕರಿ-ಬಾದುಮಯ್ಯ-ಗಜಯ್ಯ ಮುಂತಾದ ಹೆಸರಿನಿಂದ ಗುರುತಿಸಲಾಗಿದೆ.

## ಬಾದುಬ್ಬೆ-ಗಜಲಕ್ಷ್ಮಿ :

ಸೋಗಿ (ಹಡಗಲಿ ತಾ॥ ಬಳ್ಳಾರಿ ಜಿ.) ಗ್ರಾಮದ ಗಜಲಕ್ಷ್ಮಿಯ ಶಿಲ್ಪವು** ಪದ್ಮಾಸನದಲ್ಲಿ ಕುಳಿತು ದ್ವಿಬಾಹುಯುಕ್ತಳಾಗಿದ್ದು, ಕೈಗಳಲ್ಲಿ ಪದ್ಮಗಳು, ಆಚೆ-ಈಚೆ ನಿಂತ ಆನೆಗಳು ಸೊಂಡಿಲುಗಳಲ್ಲಿ ಕುಂಭಗಳನ್ನು ಹಿಡಿದು ಅಭಿಷೇಕ ಮಾಡುತ್ತಿವೆ. ಮೇಲೆ ಮಕರ ತೋರಣವಿದೆ. ಪೀಠದ ಮೇಲೆ ''ಶ್ರೀ ಗಜಯ್ಯನ ಫಲಕಂ'' ಎಂದು ಶಾಸನವಿದೆ. ಬಾಳೂರು (ಹಾನಗಲ್ ತಾ. ಧಾರವಾಡ ಜಿ.) ಗ್ರಾಮದಲ್ಲಿಯ ಗಜಲಕ್ಷ್ಮಿ ಶಿಲ್ಪವು ಪದ್ಮಾಸನದಲ್ಲಿ ಕುಳಿತ ಚತುರ್ಬಾಹು ಯುಕ್ತಳಾಗಿದ್ದು ಆಚೆ ಈಚೆ ನಿಂತ ಆನೆಗಳು ತಮ್ಮ ಸೊಂಡಿಲುಗಳಲ್ಲಿ ಕುಂಭಗಳನ್ನು ಹಿಡಿದು ಅಭಿಷೇಕ ಮಾಡುತ್ತಿವೆ. ಪೀಠದ ಮೇಲೆ ''ಬರ್ಮಗಾವುಂಡ ಬಾ(ದುಂ)ಬೆಯ ಪ್ರತಿಷ್ಠೆ ಮಾಡಿಸಿದ''[1] ಎಂದು ಶಾಸನವಿದೆ. ಕಂದಲಿ (ಕಲಘಟಗಿ ತಾ॥ ಧಾರವಾಡ ಜಿ.) ಗ್ರಾಮದಲ್ಲಿಯ ಸು. ಕ್ರಿ.ಶ. ೧೦೫೦ರ ಒಂದು ಶಾಸನದಲ್ಲಿ ''ಎಡಹಳ್ಳಿ ಗಾಲಯ್ಯ(ನಣು)ಗ ಮಾರಯ್ಯ ಮಾಡಿಸಿದಂ ಕನ್ನಲೆಯ ಬಾದುಬ್ಬೆಯಂ''[2] ಈ ಶಾಸನದ ಸಮೀಪದಲ್ಲಿಯೇ ಬಾದುಬ್ಬೆಯ ಪ್ರತಿಮೆ ಇದೆ.[3]

ಕೆಲವು ಶಾಸನಗಳಲ್ಲಿ ಬಾದಮ್ಮ[4], ಬಾದುವೆ[5], ಬಾದುಬ್ಬೆ[6], ಬಾದುಬ್ಬೆಯ ಪರ್ವ[7], ಬಾದುಂಬೆ[8], ಬಾದುಂಬೆ (ಕೆರೆ)[9], ಚೋದುಂಬೆ[10], ಬಾದುವಯ್ಯ[11], ಮುಂತಾದ ಉಲ್ಲೇಖಗಳಿವೆ. ಹುಗಲೂರು, ಕತ್ತೆಬೆಣ್ಣೂರು, ಕೊಂಬಳಿ, ಬೂದನೂರು, ಕುರುವತ್ತಿ, ನಂದಗಾವಿ (ಬಳ್ಳಾರಿ ಜಿ) ಹೌಂಶಿ (ಧಾರವಾಡ ಜಿ)*** ಗ್ರಾಮಗಳಲ್ಲಿರುವ

* ವಸ್ತು ಸಂಗ್ರಹಾಲಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-೫೮೩ ೨೭೬

** ಈ ಶಿಲ್ಪವು ಹಂಪಿ ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದಲ್ಲಿದೆ

*** ನನ್ನ ಕ್ಷೇತ್ರಕಾರ್ಯದಲ್ಲಿ ಕಂಡುಬಂದ ಗಜಲಕ್ಷ್ಮಿಯ ಶಿಲ್ಪಿಗಳು

1 ಗುರುವ, ಆರ್.ಎನ್., ''ಬಾದುಬ್ಬೆ'', ಕರ್ನಾಟಕ ಭಾರತಿ, ೬:೨, ಪು. ೧೩೨-೪

2 ಅದೇ

3 ಚಿದಾನಂದಮೂರ್ತಿ ಎಂ. ೧೯೯೩, ''ಬಾದುಬ್ಬೆ-ಬಾದುಮಯ್ಯ-ಬನಶಂಕರಿ ಪೆಟ್ಟಿಗೆ ಲಜ್ಜಾಗೌರಿ'', ಹೊಸತು ಹೊಸತು, ಪು. ೩೯೫ ಕನ್ನಡ ವಿಶ್ವವಿದ್ಯಾಲಯ, ಹಂಪಿ

4 ಸೌಥ್ ಇಂಡಿಯನ್ ಇನ್‌ಸ್ಕ್ರಿಪ್ಶನ್ಸ್, IX, i, ನಂ. ೫೯

5 ಅದೇ, XV ನಂ. ೯೮ : ಕರ್ನಾಟಕ ಇನ್‌ಸ್ಕ್ರಿಪ್ಶನ್ಸ್, V ಪು. ೪೩

6 ಗುರುವ, ಆರ್.ಎನ್. 'ಬಾದುಬ್ಬೆ' ಕರ್ನಾಟಕ ಭಾರತಿ, ೬:೨, ಪು. ೧೩೨-೪

7 ಕನ್ನಡ ಇನ್‌ಸ್ಕ್ರಿಪ್ಶನ್ಸ್ ಆಫ್ ಆಂಧ್ರ ಪ್ರದೇಶ, ಪು. ೮೬

8 ಎಪಿಗ್ರಾಫಿಯಾ ಕರ್ನಾಟಿಕ, VII, ಪು. ೨೩೫ (ರೈಸ್ ಆವೃತ್ತಿ)

9 ಕರ್ನಾಟಕ ಇನ್‌ಸ್ಕ್ರಿಪ್ಶನ್ಸ್, IV, ಪು. ೩೦ ಮತ್ತು ೫೮

10 ಸೌಥ್ ಇಂಡಿಯನ್ ಇನ್‌ಸ್ಕ್ರಿಪ್ಶನ್ಸ್ IX, i. ಪು. ೩೨೭

11 ಅದೇ, ಪು. ೪೦೭



ಬನಶಂಕರಿ ವಿಗ್ರಹ, ದರೋಜಿ, (ಬಳ್ಳಾರಿ ಜಿಲ್ಲೆ)

ಗಜಲಕ್ಷ್ಮಿಯ ಶಿಲ್ಪಗಳನ್ನು ಬಾಣಂತಿ ಕಲ್ಲುಗಳೆಂದು ಜನರು ಕರೆಯುತ್ತಾರೆ ಹಾಗೂ ಹೆರಿಗೆಯಾಗುವ ವೇಳೆಯಲ್ಲಿ ಮುಖಕೆಳ ಮಾಡಿ ಮಲಗಿಸಿ ಹೆರಿಗೆಯಾದ ನಂತರ ಮೊದಲಿನಂತೆ ನಿಲ್ಲಿಸಿ ಪೂಜೆ ಮಾಡುತ್ತಾರೆ.

**ಬನಶಂಕರಿ**

ದರೋಜಿ (ಬಳ್ಳಾರಿ ಜಿ) ಗ್ರಾಮದ ಗುಡ್ಡದ ಕೆಳಭಾಗ ಅದಕ್ಕೆ ಹೊಂದಿಕೊಂಡು ಒಂದು ಚಿಕ್ಕ ದೇವಾಲಯದಲ್ಲಿ ಬನಶಂಕರಿಯ ಶಿಲ್ಪವಿದೆ.* ಈ ಶಿಲ್ಪಕ್ಕೆ ಮುಖದ ಮೇಲೆ ಮೀಸೆ, ಎದೆಯ ಮೇಲೆ ಸ್ತನಗಳಿವೆ ಇಂಥ ಲಕ್ಷಣಗಳುಳ್ಳ ಶಿಲ್ಪಗಳು, ಕುಳಗಟ್ಟೆ (ಹೊನ್ನಾಳ್ಳಿ ತಾ. ಶಿವಮೊಗ್ಗ ಜಿ.), ಆನವೇರಿ (ಚನ್ನಗಿರಿ ತಾ) ಗ್ರಾಮಗಳಲ್ಲಿವೆ. ಕುಳಗಟ್ಟೆ ಗ್ರಾಮದ ಬನಶಂಕರಿ ಶಿಲ್ಪಕ್ಕೆ ಎದೆಯ ಮೇಲೆ ಸ್ತನಗಳೂ ಮುಖದ ಮೇಲೆ ಮೀಸೆಯೂ ಇವೆ.[12] ಆನವೇರಿ ಗ್ರಾಮದ ಬಂದಳಿಕೆ ಅಮ್ಮ ಅಥವಾ ಬನಶಂಕರಿ ವಿಗ್ರಹಕ್ಕೆ ಎದೆಯ ಮೇಲೆ ಸ್ತನಗಳೂ, ಮುಖದ ಮೇಲೆ ಮೀಸೆಯೂ, ಕೈಯಲ್ಲಿ ಬಳೆಗಳೂ ಮತ್ತು ಗುಪ್ತಾಂಗದ ಮುಂದೆ ಸರ್ಪ ಹೆಡೆ ಎತ್ತಿ ನಿಂತಿದೆ.

**ಬಾದುಬ್ಬೆ-ಬನಶಂಕರಿ-ಬಾದುಮಯ್ಯ-ಗಜಯ್ಯ**

ಬಾದುಮಯ್ಯ ಎಂಬ ವ್ಯಕ್ತಿಯ ಹೆಸರು ಒಂದು ಶಾಸನದಲ್ಲಿದ್ದರೆ, ಅದೇ ಹೆಸರಿನ ಪುರುಷ ಗ್ರಾಮ ದೇವತೆಯ ಹೆಸರು ಸಾಹಿತ್ಯಗಳಲ್ಲಿ ಕಂಡುಬರುತ್ತದೆ.[13] ಹೆಣ್ಣು ದೇವತೆಯಾದ ಗಜಲಕ್ಷ್ಮಿಯ ಪೀಠದ ಮೇಲೆ ಗಜಯ್ಯನೆಂಬ** ಪುರುಷ ದೇವತೆಯ ಹೆಸರು ಮತ್ತು ಬನಶಂಕರಿಯ ಶಿಲ್ಪದಲ್ಲಿ ಸ್ತ್ರೀ, ಪುರುಷ ಲಕ್ಷಣಗಳನ್ನು ಗಮನಿಸಿದರೆ ಸ್ತ್ರೀ ದೇವತೆಯೋ ? ಪುರುಷ ದೇವತೆಯೋ ? ಎಂಬುದು ಅನುಮಾನ ಉಂಟಾಗುತ್ತದೆ. ಬನಶಂಕರಿ ವಿಗ್ರಹಗಳಲ್ಲಿ ಮೀಸೆಯನ್ನು ಗಮನಿಸಿದರೆ ಬಾದುಮಯ್ಯ ಎಂಬ ಪುರುಷ ದೇವತೆ, ಎದೆಯನ್ನು ಗಮನಿಸಿದರೆ ಬಾದುಮೆ ಎಂಬ ಸ್ತ್ರೀ ದೇವತೆ; ಬಾದುಮಯ್ಯ ಎಂಬ ಪುರುಷ ದೇವತೆ ಎರಡು ಬೇರೆ ಬೇರೆ ದೈವಗಳಾಗಿರದೇ ಬನದಬ್ಬೆ ಅಥವಾ ಬನಶಂಕರಿಯೇ ಆಗಿದೆ ಎಂದು ಡಾ|| ಎಂ. ಚಿದಾನಂದ ಮೂರ್ತಿಯವರ ಅಭಿಪ್ರಾಯ.[14] ಬನಶಂಕರಿಯ ಆರಾಧಕರ ಪ್ರಕಾರ ಅವಳೇ ಆದಿಶಕ್ತಿಯಾಗಿರುವುದರಿಂದ ಅವಳಿಂದ ಸೃಷ್ಟಿ ನಡೆದಿರುವುದರಿಂದ ಮತ್ತು ಸಂತಾನ ದೇವತೆ ಯಾಗಿರುವುದರಿಂದ ಅವಳು ಪುರುಷನೂ ಹೌದು, ಸ್ತ್ರೀಯೂ ಹೌದು.

ಬಾದುಬ್ಬೆ-ಬನಶಂಕರಿ-ಅಥವಾ ಗಜಲಕ್ಷ್ಮಿ; ಸಂತಾನ ದೇವತೆ, ಕಾಡಿನ ದೇವತೆ, ಆದಿಶಕ್ತಿ ಜೊತೆಗೆ ಸೃಷ್ಟಿಗೆ ಜನ್ಮದಾತೆಯೂ ಆಗಿರುವುದರಿಂದ ಗಂಡು, ಹೆಣ್ಣಿನ ಎರಡೂ ರೂಪಗಳನ್ನು ಅಳವಡಿಸಿಕೊಂಡಿರಬಹುದು. ○

---

* ನನ್ನ ಕ್ಷೇತ್ರ ಕಾರ್ಯದಲ್ಲಿ ಕಂಡುಬಂದ ಬನಶಂಕರಿ ಶಿಲ್ಪ

** ಈ ಶಿಲ್ಪದಲ್ಲಿ ಲಕ್ಷ್ಮಿಯ ಆಚೆ-ಈಚೆ ನಿಂತ ಗಜಗಳು ಸೊಂಡಿಲುಗಳಲ್ಲಿ ಕುಂಭಗಳನ್ನು ಹಿಡಿದು ಅಭಿಷೇಕ ಮಾಡುತ್ತಿರುವುದರಿಂದ "ಗಜಯ್ಯನ ಫಲಕಂ" ಅಥವಾ ಗಜಯ್ಯನೆಂಬ ವ್ಯಕ್ತಿ ಇದನ್ನು ನಿರ್ಮಿಸಿರುವುದರಿಂದ ಈ ರೀತಿ ಕರೆದಿರಬಹುದು

12 ಚಿದಾನಂದಮೂರ್ತಿ ಎಂ., ಹೊಸತು ಹೊಸತು

13 (ಸಂ.) ಎಸ್.ಎಸ್. ಮಾಳವಾಡ., ಹರಿಹರನ ಮೂರು ರಗಳೆಗಳು : "ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ"

14 ಚಿದಾನಂದಮೂರ್ತಿ ಎಂ., ಹೊಸತು ಹೊಸತು